# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

MUNJAVU' Kannada Weekly, KOPPA-CHM. ಫೋನ್ : 114

ವರ್ಷ 37ನೇ ಸಂಚಿಕೆ ಕೊಪ್ಪ 13-5-1990 ಭಾನುವಾರ ಬೆಲೆ 60 ಪೈಸೆ


## ಮತದಾರರ ಪಟ್ಟಿಗೆ ಸಂಕ್ಷಿಪ್ತ ಪರಿಷ್ಕರಣೆ

ಕೊಪ್ಪ: ಶೃಂಗೇರಿ ವಿಧಾನಸಭಾ ಕ್ಷೇತ್ರದ ಮತದಾರರ ಪಟ್ಟಿಗಳ ಸಂಕ್ಷಿಪ್ತ ಪರಿಷ್ಕರಣೆ ಕಾರ್ಯವನ್ನು ಕೊಪ್ಪ ತಾಲ್ಲೂಕಿನಲ್ಲಿ ದಿನಾಂಕ 3-5-90ರಿಂದ ಪ್ರಾರಂಭಿಸಲಾಗಿದ್ದು, ಕರಡು ಮತದಾರರ ಪಟ್ಟಿಯನ್ನು ಆಯಾ ಗ್ರಾಮ ಲೆಕ್ಕಿಗರ ವಲಯಗಳ ಕೇಂದ್ರ ಸ್ಥಾನದಲ್ಲಿ ಹಾಗೂ ಆಯಾ ಮಂಡಲ ಪಂಚಾಯ್ತಿ ಕಚೇರಿಗಳಲ್ಲಿ ಮತ್ತು ತಾಲ್ಲೂಕು ಕಚೇರಿಯಲ್ಲಿ ದಿನಾಂಕ 3-5-90ರಿಂದ ಪ್ರಕಟಿಸಲಾಗಿದ್ದು, ದಿನಾಂಕ 1-1-90ಕ್ಕೆ ಹದಿನೆಂಟು ವರ್ಷ ಮತ್ತು ಅದಕ್ಕೂ ಮೇಲ್ಪಟ್ಟ ವಯಸ್ಸಾದವರ ಹೆಸರು ಮತದಾರರ ಪಟ್ಟಿಯಲ್ಲಿ ಸೇರಿಲ್ಲವಂಥವರು ತಮ್ಮ ಹೆಸರುಗಳನ್ನು ಸೇರಿಸಿಕೊಳ್ಳಲು ಅರ್ಹತೆ ಹೊಂದಿರುತ್ತಾರೆ ಹಾಗೂ ಹಕ್ಕು ಅಥವಾ ಆಕ್ಷೇಪಣೆಗಳನ್ನು ಸಾಧಿಸಿಕೊಳ್ಳುವಂಥವರುಗಳು ದಿನಾಂಕ 18-5-90ರ ಒಳಗಾಗಿ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ನೇಮಕಗೊಂಡಿರುವ ನಿರ್ದಿಷ್ಟಾಧಿಕಾರಿಗಳಿಗೆ (ಡೆಸಿಗ್ನೇಟೆಡ್ ಅಧಿಕಾರಿ) ಕೊಡಲು ಅವಕಾಶವಿದೆ ಈ ಅವಕಾಶವನ್ನು ಎಲ್ಲರೂ ಸದುಪಯೋಗಪಡಿಸಿಕೊಳ್ಳಲು ಕೋರಲಾಗಿದೆ

# ಮಾಜಿ ಪ್ರಧಾನರಿಂದ ಧಾಂಧಲೆ ಆರೋಪ

ನ. ರಾ. ಪುರ : ಮೇ 9 ರ ರಾತ್ರಿ ಇಲ್ಲಿನ ವಲಯ ಅರಣ್ಯಾಧಿಕಾರಿ ಕಛೇರಿಯಲ್ಲಿ ಧಾಂಧಲೆ ನಡೆಸಿ, ಅಧಿಕಾರಿಗಳನ್ನು ಅವಾಚ್ಯವಾಗಿ ನಿಂದಿಸಿದ್ದಕ್ಕಾಗಿ ಮಾಜಿ ಪ್ರಧಾನ ವರ್ಗೀಸ್ (ರಾಜು) ವಿರುದ್ಧ ಅರಣ್ಯಾಧಿಕಾರಿ ಜವರೇ ಗೌಡ ಪೋಲೀಸರಿಗೆ ದೂರು ನೀಡಿದ್ದಾರೆ.

ರಾಜು ಅವರ ಆದೇಶದಂತೆ ಅವರ ಜಮೀನ ಬಳಿ ತಾರಿ ಮರವೊಂದನ್ನು ಅನಧಿಕೃತವಾಗಿ ಕಡಿದ ಆರೋಪಿಗಳನ್ನು ಬಂಧಿಸಿದ್ದಕ್ಕಾಗಿ ಬೀಟೆ ಅಕ್ರಮ ಸಾಗಣೆ ಆರೋಪಿ ...ರ್ ಹಾಗೂ ಇನ್ನಿತರ 10–15 ಜನ ಬಲಿಗರೊಂದಿಗೆ ರಾತ್ರಿ ಪಾನಮತ್ತನಾಗಿ ...ದ ರಾಜು ದೊಂಬಿ ಎಬ್ಬಿಸಿ, ಜವರೇ ಗೌಡ ಮತ್ತು ಸಿಬ್ಬಂದಿಯನ್ನು ಸಬ್ ಇನ್ಸ್ಪೆಕ್ಟರ್ ಎದುರೇ ಅವಾಚ್ಯವಾಗಿ ನಿಂದಿಸಿ ಬೆದರಿಕೆ ಹಾಕಿದರೆನ್ನಲಾಗಿದೆ.

ಪುನಃ ಮೇ 11ರ ಬೆಳಿಗ್ಗೆ ಯಾರೋ ದುಷ್ಕರ್ಮಿಗಳು ರೇಂಜರ್ ಕಛೇರಿ, ನಿವಾಸಗಳ ಕಡೆ ಕಲ್ಲು ತೂರಿ, ಕಾವಲುಗಾರನಿಗೆ ಜೀವ ಭಯ ಒಡ್ಡಿದ್ದಾಗಿಯೂ ರೇಂಜರು ಮತ್ತೊಂದು ದೂರು ನೀಡಿದ್ದಾರೆ.

ಮೇ 10 ರಿಂದಲೂ ರಿಸರ್ವ್ ಪೋಲೀಸರು ಇಲ್ಲಿ ಬೀಡು ಬಿಟ್ಟಿದ್ದಾರೆ. ನ. ರಾ. ಪುರ ಪೋಲೀಸರು ಇನ್ನೂ ಯಾರನ್ನೂ ಬಂಧಿಸಿಲ್ಲ.

## ...ಾರ್ವೆಯಲ್ಲಿ ಕಳುವಾಗಿದ್ದ ಪಂಪ್‌ಸೆಟ್ ಪತ್ತೆ

ಹರಿಹರಪುರ : ನಾರ್ವೆಗೆ ಸಮೀಪದ ...ತೋಟ್ಲು ಗೋಪಾಲಕೃಷ್ಣ ಎಂಬವರ ...ನಿಂದ ಕಳುವಾಗಿದ್ದ 12 ಸಾವಿರ ಬೆಲೆಯ ಪಂಪ್‌ಸೆಟ್ ಮಾವಿನಕಟ್ಟೆಗೆ ...ದ ಕಾಡಿನಲ್ಲಿ ಬಿದ್ದಿದ್ದುದು ಇಲ್ಲಿನ ...ಲೀಸರಿಗೆ ಪತ್ತೆಯಾಗಿದ್ದು, ಕೊಪ್ಪ ...ಯಲ್ಲಿ ಈ ಬಗ್ಗೆ ದಾಖಲಾಗಿದ್ದ ದೂ...ರರಿಗೆ ಮಾಲನ್ನು ಕೊಪ್ಪ ಪೋಲೀ...ಗೆ ಹಸ್ತಾಂತರಿಸಲಾಗಿದೆ.

## ತೀರ್ಥಹಳ್ಳಿಯಲ್ಲಿ ಪ್ರದೀಪ್ ತಪಸ್‌ರಿಂದ ನೈಸರ್ಗಿಕ ಕೃಷಿ ವಿಚಾರ ಸಂಕಿರಣ

**ತೀರ್ಥಹಳ್ಳಿ : ನೈಸರ್ಗಿಕ ಕೃಷಿ ತಜ್ಞರಾದ ಧಾರವಾಡದ ಪ್ರದೀಪ್ ತಪಸ್ ಅವರು ಇಲ್ಲಿನ ಕುರುವಳ್ಳಿಯಲ್ಲಿರುವ ಪುರುಷೋತ್ತಮ ರಾವ್ ಅವರ 'ಕೃಷಿ ನಿವಾಸ'ದ ಆವರಣದಲ್ಲಿ ಮೇ 18ರ ಶುಕ್ರವಾರ ಕೃಷಿ ವಿಚಾರ ಸಂಕಿರಣ ನಡೆಸಿಕೊಡಲಿದ್ದಾರೆ.**

**ಬೆಳಿಗ್ಗೆ 9-00 ಗಂಟೆಗೆ ಆರಂಭವಾಗುವ ಈ ಕಾರ್ಯಕ್ರಮ ಇಡೀ ದಿನ ನಡೆಯುವುದು. ಪ್ರತಿನಿಧಿಗಳಿಗೆ 25 ರೂ ಪ್ರವೇಶ ಶುಲ್ಕವಿದೆ. ಕೊಪ್ಪದಿಂದ ತೀರ್ಥಹಳ್ಳಿಗೆ ಬೆಳಿಗ್ಗೆ ಬಸ್ ಸೌಕರ್ಯ ಹೀಗಿದೆ : 7.45 (ಶಂಕರ್), 8.00 (ಉದಯ), 8.15 (ಭಾಗ್ಯಶ್ರೀ).** (ತಡವಾಗಿ 9 ಗಂಟೆಗೂ ಸರ್ಕಾರಿ ಮತ್ತು ಶಂಕರ್–ಈ 2 ಬಸ್‌ಗಳಿವೆ) ತೀರ್ಥಹಳ್ಳಿಯಿಂದ ಕೊಪ್ಪಕ್ಕೆ ಕೊನೇ **ಬಸ್ ರಾತ್ರಿ, 7.30ಕ್ಕೆ.**

# ಕಾಂಗ್ರೆಸ್ ಮತ್ತು ತಹಸೀಲ್ದಾರ್ ಕುತಂತ್ರದಿಂದ ವಂಚನೆ : ಸೋತ ಹರಿಜನ ಅಭ್ಯರ್ಥಿ ಬೆಳ್ಳಯ್ಯ ಆರೋಪ

**(ವರದಿ : ಕಲ್ಕುಳಿ ವಿಠಲ ಹೆಗ್ಡೆ)**

ಶೃಂಗೇರಿ : ಫೆ 25ರ ಚುನಾವಣೆಗೆ ಅಂಗೀಕೃತವಾದ ಅಂತಿಮ ಪಟ್ಟಿಯ ಪ್ರಕಾರ, 5ನೇ ವಿಭಾಗದಲ್ಲಿ ಮರಾಠಿ ಗಿರಿಜನ ಸಂಗಡದ ನಾಗರಾಜು (ಅವರು ಜಾತಿ ಸರ್ಟಿಫಿಕೇಟ್ ಒದಗಿಸದಿದ್ದುದರಿಂದ) ಅವರ ನಾಮಪತ್ರ ಸಾಮಾನ್ಯ ಕ್ಷೇತ್ರಕ್ಕೆ ಅಂಗೀಕೃತವಾಗಿತ್ತು. ಮೀಸಲು ಸ್ಥಾನಕ್ಕೆ ಬೆಳ್ಳಯ್ಯ ಒಬ್ಬರೇ ಉಳಿದಿದ್ದರಿಂದ ಅವರ ಆಯ್ಕೆ ಅವಿರೋಧವಾಗ ಆದಂತಾಗಿತ್ತು. ಇದನ್ನು ತಹಸೀಲ್ದಾರರು ಮಾತ್ರವಲ್ಲದೆ ತಾ। ಕಾಂಗ್ರೆಸ್ ಅಧ್ಯಕ್ಷ ಅಣ್ಣಯ್ಯ ಹೆಗ್ಡೆಯವರೂ ಬಿ ಜೆ ಪಿ ಯ ಟಿ. ಎಲ್. ಕೃಷ್ಣ ಭಟ್ಟರೂ ಈ ವರದಿಗಾರನಿಗೆ ತಿಳಿಸಿದ್ದರು. (ಬೆಳ್ಳಯ್ಯ ಆಯ್ಕೆಯಾಗಿದ್ದಾರೆಂದು ಚುನಾವಣೆಗೆ ಮುಂಚೆಯೇ ಪ್ರಕಟಿಸಲು ಪಂಚಾಯ್ತಿ ಕಾಯ್ದೆಯಲ್ಲಿ ಅವಕಾಶವಿಲ್ಲ. ಅವರೂ ಒಂದು ಚಿಹ್ನೆಯ ಮೇಲೆ ಸ್ಪರ್ಧಿಸಬೇಕಿತ್ತು ; ಒಂದೇ ಓಟು ಬಿದ್ದರೂ ಸಹ, ಅವರ ಆಯ್ಕೆಯನ್ನು ಅನಂತರವೇ ಪ್ರಕಟಿಸಬೇಕಿತ್ತು. ಇದನ್ನೂ ತಹಸೀಲ್ದಾರ್ ಈ ವರದಿಗಾರನಿಗೆ ತಿಳಿಸಿದ್ದರು )

ಮೊದಲಿಗೆ ಕಾಂಗ್ರೆಸ್ ಇವರಿಬ್ಬರನ್ನೂ 5ನೇ ವಿಭಾಗಕ್ಕೆ ತನ್ನ ಸಾಮಾನ್ಯ ಮತ್ತು ಮೀಸಲು ಅಭ್ಯರ್ಥಿಗಳೆಂದು ಘೋಷಿಸಿತ್ತು. ಆದರೆ ಬೆಳ್ಳಯ್ಯ ತಾನು ಸ್ವತಂತ್ರ ಅಭ್ಯರ್ಥಿಯೆಂದು ಘೋಷಿಸಿಕೊಂಡರು. ಈ ಹಿನ್ನೆಲೆಯಲ್ಲಿ, (ಅನಂತರ ಚುನಾವಣೆ ಮುಂದೂಡಲ್ಪಟ್ಟಾಗ) ನಾಗರಾಜು ಮೊದಲಿಗೇ ಜಾತಿ ಸರ್ಟಿಫಿಕೇಟ್ ಒದಗಿಸಿದ್ದಂತೆಯೂ, ಅವರ ನಾಮಪತ್ರ ಮೀಸಲು ಸ್ಥಾನಕ್ಕೆ ಅಂಗೀಕೃತವಾಗಿದ್ದಂತೆಯೂ ಸೃಷ್ಟಿಸುವ ಯಶಸ್ವಿ ಒಳತಂತ್ರ ನಡೆದು, ನಾಗರಾಜುವನ್ನು ಕಾಂಗ್ರೆಸ್ ವತಿಯಿಂದ ಮೀಸಲು ಅಭ್ಯರ್ಥಿಯೆಂದು ನಿಲ್ಲಿಸಲಾಯಿತೆಂದು ಬೆಳ್ಳಯ್ಯ ಆರೋಪಿಸಿದ್ದಾರೆ.

ಬೇರೊಂದು ಪ್ರಕರಣದಲ್ಲಿ ಶಾಸಕರ ಕೆಂಗಣ್ಣಿಗೆ ಗುರಿಯಾಗಿದ್ದ ತಹಸೀಲ್ದಾರ್ ಅವರು ಈ ಸಂದರ್ಭದಲ್ಲಿ ಕಾಂಗ್ರೆಸ್ಸಿನ ಈ ತಂತ್ರಕ್ಕೆ ಶಾಮೀಲಾಗಿದ್ದಾಗಿ ಕೇಳಿ ಬರುತ್ತಿದೆ.

ಚುನಾವಣೆಯ ವೇಳೆ ನಾಗರಾಜು ಮುಗ್ಧ ಹರಿಜನ ಮತದಾರರಲ್ಲಿ ತನಗೂ ಬೆಳ್ಳಯ್ಯನಿಗೂ ಇಬ್ಬರಿಗೂ ಮತ ನೀಡುವಂತೆ ಪ್ರಚಾರ ಮಾಡಿದ್ದಾರೆಂದೂ ಆರೋಪಿಸಿರುವ ಬೆಳ್ಳಯ್ಯ, ಇದರಿಂದ ಇಬ್ಬರ ಮತಗಳೂ ಕುಲಗೆಟ್ಟರೂ ಸಹ, ಹರಿಜನೇತರರ ಮತಗಳನ್ನು ತನಗಿಂತ ಹೆಚ್ಚು ಗಳಿಸಿದ ನಾಗರಾಜು ಗೆಲ್ಲಲು ಸಾಧ್ಯವಾಯಿತೆಂದು ತಿಳಿಸಿ, ಕಾಂಗ್ರೆಸ್ ಮತ್ತು ಅಧಿಕಾರಿಗಳ ಈ ಕುತಂತ್ರ ಮತ್ತು ವಂಚನೆಗಳನ್ನು ಖಂಡಿಸಿದ್ದಾರೆ.

ಈ ಬಗ್ಗೆ ಚುನಾವಣೆಗೆ ಮೊದಲೇ ನ್ಯಾಯಾಲಯದಲ್ಲಿ ತಕರಾರು ಸಲ್ಲಿಸಬಹುದಿತ್ತಾದರೂ, ಅಂಥ ಆರ್ಥಿಕ ಅನುಕೂಲ ತನಗಿಲ್ಲದ್ದರಿಂದ ತಾನು ಈ ವಂಚನೆಗೆ 'ಬಲಿ'ಯಾಗುವುದು ಅನಿವಾರ್ಯವಾಯಿತೆಂದು ಬೆಳ್ಳಯ್ಯ ಕೋಪಗೊಂಡಿದ್ದಾರೆ.

# "ಹೀನ ಶೀರ್ಷಿಕೆ"ಗೆ — ನೋಟೀಸ್

ನೋಟೀಸ್ ರೂಪದ ಈ ಲೇಖನಕ್ಕೆ ಯಾವ ಶೀರ್ಷಿಕೆಯನ್ನೂ ಕೊಡಲಾಗದ ಅಸಹ್ಯಕರ ಸ್ಥಿತಿಯಲ್ಲಿ—ಒಂದು ವೇಳೆ ಕೊಟ್ಟರೂ ಮತ್ತೆ ಮತ್ತೆ ಅವೇ ಕೊಳಕು ಜಿಗುಪ್ಸೆಯ ಶಬ್ದಗಳು—ವರದಕ್ಷಿಣೆ ಮದುವೆ, ಕಿರುಕುಳ, ಸಾವು ಇತ್ಯಾದಿಗಳ ಪುನರಾವರ್ತನೆಯ ನಿಯಂತ್ರಣಕ್ಕಾಗಿ ಈ ನೋಟೀಸ್ :

> **ಕೈತುಂಬ ಸಂಬಳದ ಸರ್ಕಾರಿ ಅಧಿಕಾರಿಯಾದ** ಒಬ್ಬ ಸುಂದರ ತರುಣ, ತನ್ನ ವಧು ಹೇಗಿದ್ದಾಳೆಂದೂ ನೋಡದೆ, **ಹಿರಿಯರು** "ವ್ಯವಹಾರ" ಕುದುರಿಸಿದಂತೆ **ಮಾರುತಿ ಕಾರು,** ಇನ್ನಿತರೆ **ಸಾಧನಗಳು,** ಹಲೋರಾವರೆ ಲಕ್ಷ ನಗದು—ಇಷ್ಟನ್ನು ಒಪ್ಪಿ ಮೆಚ್ಚಿ **ಮದುವೆಯಾಗುತ್ತಾನೆಂದರೆ,** ಅತ ಆ ಹುಡುಗಿಯ ಬಗ್ಗೆ ಎಷ್ಟು ಕಾಳಜಿ ಹೊಂದಿರಬಲ್ಲ ? ಆಕೆಯ ಭಾವೀ ಬದುಕಿನ ಬಗ್ಗೆ ಎಂಥ **ಭರವಸೆಯಿಡಬಹುದು ?** ಎಂಬ ಪ್ರಶ್ನೆಗಳೇಳುತ್ತವೆ
>
> ನಮ್ಮ **ಸಮಾಜದ** ಮೈಗಂಟಿ ಕೀವು ಒಸರುತ್ತಿರುವ **ಈ ಹೊಲಸು** ಹುಣ್ಣಿಗೆ ನಾವೆಲ್ಲ **ಶ್ರದ್ಧೆಯಿಂದ,** ದೃಢತೆಯಿಂದ, ಕೆಚ್ಚಿನಿಂದ ಚಿಕಿತ್ಸೆ ಮಾಡಲೇಬೇಕು. ಅದೇನೂ **ಚಿಕಿತ್ಸೆಯಿಲ್ಲದ** ರೋಗವಲ್ಲ. ಹಾಗೆಂದು ತಾನಾಗಿಯೇ ವಾಸಿಯಾಗುವಂಥದೂ ಅಲ್ಲ. ಸ್ವಲ್ಪ **ತೀಕ್ಷ್ಣ**ವಾದ, ಉಗ್ರವಾದ (drastic) **ಚಿಕಿತ್ಸೆಯೇ ಬೇಕಾದೀತು,** ಅಷ್ಟೇ.

ಇತ್ತೀಚಿನ ಪತ್ರಿಕೆಗಳಲ್ಲಿ ಹಾ||ಯುವಮುನಾರವರ ಸಾವಿಗೆ—ಆತ್ಮಹತ್ಯೆ ಅಥವಾ ಕೊಲೆಯ ನಡುವೆ ಆಕೆ ಸತ್ತಿದ್ದಂತೂ ಸತ್ಯ—ಸಂಬಂಧಿಸಿದಂತೆ, ವರದಕ್ಷಿಣೆಯ ತಗಾದೆ, ಅತ್ತೆಯಿಂದ ಕಿರುಕುಳ, ಪತಿಯೆನ್ನಿಸಿಕೊಂಡವನ ಗೋಸುಂಬೆತನ, ಸ್ಕೂಟರಿಗಾಗಿ ಹಟಮಾರಿತನ, ಕೊನೆಯಲ್ಲಿ ಈಕೆಯ ಸಾವು; ಪತ್ರಿಕೆಗಳಲ್ಲಿ ಫೋಟೋಗಳ ಸಮೇತ ವಿವರಣೆ, ಕೇಸು,

**ಶಶಿಕಲಾ ಉರಣ್ಕರ್**
**ವಕೀಲರು, ನ. ರಾ. ಪುರ**

ವಿಚಾರಣೆ.... ಅಂತೂ ನಿತ್ಯವೂ ಇವುಗಳನ್ನು ಓದಿ ಓದಿ, ಒಂದರ್ಥದಲ್ಲಿ ಈ ಎಲ್ಲ ಅವಲಕ್ಷಣಗಳಿಗೂ ನಮ್ಮನ್ನು ಒಗ್ಗಿಸಿಕೊಂಡ ನಮ್ಮ ಹೀನ ಮನಃಸ್ಥಿತಿಯ ಪ್ರತಿಬಿಂಬವೆನ್ನುವಂತಹ ಪುನರಾವರ್ತನೆಗಳು

ಈ ಲೇಖನದ ಉದ್ದೇಶ ಈ ವಿಷ ವರ್ತುಲ ಹಾಗೂ ತತ್ಸಂಬಂಧದ ಪರಿಣಾಮಗಳನ್ನು ಮೆಲುಕು ಹಾಕುವುದಲ್ಲ. ಈ ಕೊಪ್ಪ, ನ. ರಾ. ಪುರ, ಶೃಂಗೇರಿ—ಈ ಮೂರು ತಾ|| ಗಳಲ್ಲಿ ಬೇಕಾದಷ್ಟು ಮಹಿಳಾ / ಯುವತಿ ಮಂಡಳಿಗಳು ಮತ್ತು ಪ್ರಜ್ಞಾವಂತ ಸಂಘಟನೆಗಳು ಇದ್ದಾಗ್ಯೂ, ಇಲ್ಲಿಯೂ ಸಹ ವರದಕ್ಷಿಣೆ ವ್ಯಾಪಾರ, ಅನಂತರದ ಕಿರುಕುಳ, ಅಸಹಜ ಸಾವುಗಳು ಕಡಿಮೆ ಏನಿಲ್ಲ. ಇವುಗಳ ಬಗ್ಗೆ ಹಲವಾರು ಕಾರಣಗಳಿಂದಾಗಿ ಮೇಲೆ ತಿಳಿಸಿದಂಥ ಯಾವುದೇ ಸಂಘಟನೆಗಳು ಸಮರ್ಪಕ ಕ್ರಮವನ್ನು ಕೈಗೊಳ್ಳದೇ ಇರುವಂಥ ಅಸಹಾಯಕತೆಗೆ ಹಲವಾರು ಮಹಿಳೆಯರು ಬಲಿಯಾಗುವುದು ತಪ್ಪಿಲ್ಲ.

**ಅದ್ದರಿಂದ, ಈ ವರದಕ್ಷಿಣೆ ವ್ಯವಹಾರದ ಪಾಲುದಾರಿಕೆಗೆ ಮತ್ತು ವಿವಾಹಿತ ಮಹಿಳೆಯರಿಗೆ ತತ್ಸಂಬಂಧವಾಗಿ ಕಿರುಕುಳ ನೀಡುವವರಿಗೆ ಉಚಿತವಾದ ಬರೆ (ರ ಜೆಕಟ್ಟಿಯಂತೆ) ನೀಡುವುದು ಈ ನೋಟೀಸಿನ ಉದ್ದೇಶ**

ಹೀಗೆಯೊಂದು ಕ್ರಿಯೆಗೂ ಕಾರಣಗಳು ಇರಲೇಬೇಕಲ್ಲವೆ ? ಹಾಗೆಯೇ ಈಗ ಕೊಪ್ಪದಲ್ಲೊಂದು ಮದುವೆ. ಹುಡುಗ ಸರ್ಕಾರಿ ಉದ್ಯೋಗಿ. ಗಜೆಟೆಡ್ ದರ್ಜೆಯ ಸಂಬಳ. ಅತ ಒಪ್ಪಲಿ ... ವಾಸ್ತವವೆಂದರೆ, ಸಂಬಳದ ಎರಡು ... ಗಿಂಬಳವೂ ಇದೆ. ಇಷ್ಟಿದ್ದೂ, ಆಗಲು ಮಾವನಿಗೆ ಮೂರ್ನಾಲ್ಕು ಲಕ್ಷದಷ್ಟು ಚೌರ ! (ವರದಕ್ಷಿಣೆ, ವರೋಪಚಾರ, ಮದುವೆ ಖರ್ಚು, ಮದುಮಗಳಿಗೆ ಉಡುಗೊರೆ ಇವೂ ಸೇರಿವೆ.) ಇದನ್ನೆಲ್ಲ ಹೆಣ್ಣಿನ ತಂದೆ ತನ್ನ ಮಗಳಿಗೆ ಖುಷಿಯಿಂದ ಕೊಟ್ಟಿದ್ದಾದರೆ ನಾನು ಈ ಲೇಖನ ಬರೆಯುವ ಜರೂರತ್ ಇರಲಿಲ್ಲ.

ಆದರೆ 'ವರದಕ್ಷಿಣೆ ನಿಷೇಧ ಕಾಯ್ದೆ'ಯ ವ್ಯಾಖ್ಯಾನದಂತೆ, "ಒಂದು ಗಂಡು–ಹೆಣ್ಣು ಜೊತೆಗೂಡಿ ಸಂಸಾರ ನಡೆಸಲು ಪಡೆಯಬೇಕಾದ ಸಾಮಾಜಿಕ ಮುದ್ರೆ–ಮದುವೆ ಎಂಬ ಕರಾರಿಗೆ ಹಣ ಅಥವಾ ಹಣದ ಮೌಲ್ಯವುಳ್ಳ ವಸ್ತು **ಪ್ರತಿಫಲ**ವಾಗಿರುವುದೇ ವರದಕ್ಷಿಣೆ.

ಇಲ್ಲಿ ನಾನು ದ್ವೇಷಿಸುವುದು—ಇಷ್ಟೆಲ್ಲ ಆದಾಯದ ಮೂಲ, ಅನುಕೂಲತೆ ಇದ್ದೂ ಸಹ ಮಾವನ ಗಂಟಿಗೆ ಕನ್ನ ಹಾಕಿದ ಆ **ಗಂಡಸಲ್ಲದ ಗಂಡನ್ನು ಅಲ್ಲ.** ತಮ್ಮ ಮಗಳಿಗೆ ಗುಣ–ಸಂಸ್ಕಾರವುಳ್ಳ ಗಂಡಿಗಿಂತಲೂ ಮೂರನೇ ದರ್ಜೆಯ ಉದ್ಯೋಗಿ ಆದರೂ ಸರಿಯೆ, ಅತಿ ಹೆಚ್ಚು ಲಂಚ ಸಿಗುವ, ಸಮಾಜದಲ್ಲಿ (ನಾವೆಲ್ಲ ಒಪ್ಪಿಕೊಂಡಿರುವಂತೆ) ಹುಸಿ ಪ್ರತಿಷ್ಠೆಯ ಪ್ರತೀಕಗಳನ್ನು (ಟಿ.ವಿ., ಫ್ರಿಜ್, ಮಾರುತಿ ಇತ್ಯಾದಿಗಳನ್ನು) ಹೊಂದಿರುವ/ಹೊಂದ ಬಲ್ಲ ವರಗಳನ್ನು ಆರಿಸುತ್ತ, ಅತ ಕೇಳದಷ್ಟನ್ನು ಕಾಣಿಕೆ ವರದಕ್ಷಿಣೆ ಎಂದು ಸಲ್ಲಿಸಲು ತಯಾರಿರುವ **ಈ ಪಾಪಿ ಅಪ್ಪ–ಅಮ್ಮಗಳನ್ನು.**

ಮತ್ತು ತಮಗೆ ಒಂದು ಮಾಸವಂತ ಬದುಕನ್ನು ನಡೆಸಲು ಸಹಕರಿಸಬಲ್ಲ ಸಂಗಾತಿಗಿಂತ ಕಾರು, ಫ್ರಿಜ್ಜು, ಬಂಗಲೆಗಳಂಥ ಭೌತಿಕ **ಶ್ರೀಮಂತಿಕೆ** ಹೊಂದಿರುವ ಗಂಡನೇ ಬೇಕೆಂದು ಬಯಸುತ್ತ, ಆ ಮೂಲಕ ತಂದೆ–ತಾಯಿಗಳಿಗೆ ಪರೋಕ್ಷ ಒತ್ತಡ ನೀಡಿ, ಅಂತಿಮವಾಗಿ **ಅತ್ತೆ**–ಗಂಡ–ನಾದಿನಿಯರ ನಡುವೆ ಕೊಳೆಯಲು ಸಿದ್ಧರಾಗಿರುವ **ಈ ಮೂಢ ಹುಡುಗಿಯರನ್ನು.**

(ವಿದ್ಯೆ ಮನುಷ್ಯನನ್ನು ನಾಗರೀಕನನ್ನಾಗಿ, ಸುಸಂಸ್ಕೃತನನ್ನಾಗಿ **ಮಾಡುತ್ತದೆ** ಎನ್ನುವುದು ಇಂದು ಶುದ್ಧ ಸುಳ್ಳಾಗಿದೆ ಎಂಬುದು ಇದರಿಂದೆಲ್ಲ ದೃಢ ಪಡುತ್ತದೆ. ಇಂದು ಅವಿದ್ಯಾವಂತರು, ಮುಗ್ಧರು ಮಾಡುವ ತಪ್ಪುಗಳಿಗಿಂತಲೂ ಈ ವಿದ್ಯಾವಂತರಿಂದಲೇ ಅನಾಹುತಗಳ ಪಟ್ಟಿ ಉದ್ದವಾಗುತ್ತದೆ. ವಿದ್ಯೆ ಹೆಚ್ಚಿದಷ್ಟೂ ಈ ಹುಡುಗರು ವರದಕ್ಷಿಣೆಯ ಪಾಶವೀತನಕ್ಕೆ ಹೆಚ್ಚೆಚ್ಚು ದಾಸರಾಗುತ್ತಿದ್ದಾರೆ.)

ವರದಕ್ಷಿಣೆ ಕಾಯ್ದೆಯಲ್ಲಿ ಅಪರಾಧಿಗೆ ಮರಣ ದಂಡನೆಯ ಶಿಕ್ಷೆಯೆಂಬುದು ಇದ್ದರೆ, ನನ್ನ ಪ್ರಕಾರ ಅದು ನೇರವಾಗಿ ಈ **ಅಕ್ರಮ ಸಂಪಾದನೆಯು ಅಳಿಯಂದಿರನ್ನೇ ಹುಡುಕುವ ಹಾಗೂ ಹೆಣ್ಣಿಗೆ ಮದುವೆಯೇ ಜೀವನದ ಪರಮ ಗುರಿ ಎಂದು ಭ್ರಮಿಸಿರುವ** ತಂದೆ–ತಾಯಿಯರಿಗೆ ಜಾರಿ ಆಗಬೇಕು. ಆದ್ದರಿಂದ,

(3ನೇ ಪುಟಕ್ಕೆ)




## ಪಟ್ಟಣಕ್ಕೆ ಹೊರಟಿತು ನರಿಯಣ್ಣ

ಕಬ್ಬಿನ ಹಿತ್ತಲು
ಖಾಲಿ ಆಗಲು
ಪಟ್ಣಕೆ ಹೊರಟಿತು ನರಿಯಣ್ಣ
ನಾಯಿಗೆ ಜಿಕ್ಕಿಗೆ
ಹಕ್ಕಿಗೆ ಹುಂಡಕೆ
ಟಾ ಟಾ ಹೇಳಿತು ನರಿಯಣ್ಣ
ಕಲ್ಲಿನ ಹಾದಿಯು
ಕಾಡನು ಬಿಟ್ಟು
ರೋಡನು ಸೇರಿತು ನರಿಯಣ್ಣ
ಹೊಟ್ಟೆಯ ಹಸಿವಿಗೆ
ರೊಟ್ಟಿಯ ತಿನ್ನುವ
ಯೋಚನೆ ಮಾಡಿತು ನರಿಯಣ್ಣ
ಓಡುತ ಹಾರುತ
ವೇಗದಿ ನಡೆಯುತ
ಪಟ್ಟಣ ಸೇರಿತು ನರಿಯಣ್ಣ
ಕಟ್ಟಿ ಅಂಗಡಿ
ಬುಟ್ಟಿಯ ತುಂಬಾ
ಹಣ್ಣನು ಕಂಡಿತು ನರಿಯಣ್ಣ
ಹಣ್ಣನು ಕೊಳ್ಳಲು
ಹಣವೇ ಇಲ್ಲದೆ
ಕನ್ನವ ಹಾಕಿತು ನರಿಯಣ್ಣ
ದೊಣ್ಣೆ ಏಟಿಗೆ
ಬೆನ್ನನು ಬಗ್ಗಿಸಿ
ಹಣ್ಣನು ಬಿಟ್ಟಿತು ನರಿಯಣ್ಣ
ಹೊಟ್ಟೆಯು ಹಸಿವಲಿ
ಪೆಟ್ಟಿನ ನೋವಿಗೆ
ಓಟವ ಕಿತ್ತಿತು ನರಿಯಣ್ಣ

—ಚಾಣಂಕಿ ಪ್ರಕಾಶ್

## ಸುಲೇಮಾನನ 'ಅದೃಷ್ಟ' ?!

ಅರಬ್ ದೇಶದ ಒಂದು ಪ್ರಾಂತ್ಯದಲ್ಲಿ ಸುಲೇಮಾನ್ ಎಂಬವನು ವಾಸಿಸುತ್ತಿದ್ದನು. ಅವನ ಹೆಂಡತಿ ಶ್ರಮ ಜೀವಿಯಾಗಿದ್ದಳು. ಆದರೆ ಸುಲೇಮಾನ್ ಹುಟ್ಟು ಸೋಮಾರಿ. ಎಲ್ಲರ ಹತ್ತಿರ "ನನಗೆ ಅದೃಷ್ಟ ಕಾದು ನಿಂತಿದೆ" ಎಂದು ಹೇಳುತ್ತ, ಕೆಲಸವನ್ನೇ ಮಾಡದೆ ಕಾಲ ಕಳೆಯುತ್ತಿದ್ದನು. ಅವನ ಹೆಂಡತಿ ಕಷ್ಟಪಟ್ಟು ದುಡಿದು ತನ್ನ ಗಂಡನನ್ನು ಸಾಕಬೇಕಾಗಿತ್ತು.

ಹೀಗಿರುವಾಗ ಒಂದು ದಿನ ಅವಳು ಸಿಟ್ಟುಗೊಂಡು ತಾನು ಕೆಲಸಕ್ಕೆ ಹೋಗುವುದಿಲ್ಲವೆಂದು ಹೇಳಿದಳು. ಆಗ ಅವಳ ಗಂಡ "ಇಂದು ನನ್ನ ಅದೃಷ್ಟ ಕಾದು ನಿಂತಿದೆ" ಎಂದು ಹೇಳಿ ಮನೆಯಿಂದ ಹೊರಟು ಬಿಟ್ಟನು. ಹೀಗೆ ಅವನು ಹೋಗುವಾಗ ರಸ್ತೆಯಲ್ಲಿ ಒಂದು ಹುಲಿ ಸಿಕ್ಕಿ, "ನನ್ನ ಹೊಟ್ಟೆ ಬಹಳ ದಿವಸಗಳಿಂದ ಸರಿಯಾಗಿಲ್ಲ. ಆಹಾರವೇ ಸೇರುತ್ತಿಲ್ಲ" ಎಂದು ಹೇಳಿತು. ಅದಕ್ಕೆ ಸುಲೇಮಾನ್ "ಬೆಟ್ಟದ ಮೇಲಿನ ಜ್ಯೋತಿಷ್ಯನನ್ನು ಕೇಳುತ್ತೇನೆ" ಎಂದು ಹೇಳಿದನು.

ಮುಂದೆ ಹೋಗುತ್ತಿದ್ದಾಗ ಒಂದು ಮರ ಸಿಕ್ಕಿ, "ನಾನು ಸಾಯುವ ಸ್ಥಿತಿಯಲ್ಲಿದ್ದೇನೆ. ನನಗೆ ಯಾವ ಕಾಯಿಲೆ ಇದೆ ಎಂದು ಹೇಳು" ಎಂದಿತು. ಅದಕ್ಕೆ ಸುಲೇಮಾನ್ "ಬೆಟ್ಟದ ಮೇಲಿನ ಜ್ಯೋತಿಷ್ಯನನ್ನು ಕೇಳುತ್ತೇನೆ" ಎಂದು ತಿಳಿಸಿದನು.

ನಂತರ ಅಲ್ಲೇ ಬೆಟ್ಟದ ಮೇಲೆ ಇದ್ದ ಪ್ರಸಿದ್ಧ ಜ್ಯೋತಿಷ್ಯಗಾರನಾದ ಯೂಸುಫನನ್ನು ಕಂಡು ಹುಲಿ, ಮರ, ಮತ್ತು ತನ್ನ ಅದೃಷ್ಟದ ಬಗ್ಗೆ ಕೇಳಿ ಹಿಂತಿರುಗಿದನು. ಮೊದಲು ಮರದ ಹತ್ತಿರ ಬಂದು, "ನೀನು ಇರುವ ಭೂಮಿ ವಜ್ರದಿಂದ ಕೂಡಿದೆ. ಆ ವಜ್ರಗಳನ್ನು ತೆಗೆದರೆ ನೀನು ಬದುಕುತ್ತೀ" ಎಂದನು.

ಅದಕ್ಕೆ ಆ ಮರ "ನೀನು ಈ ವಜ್ರಗಳನ್ನು ತೆಗೆದು ನನ್ನನ್ನು ಉಳಿಸು" ಎಂದಿತು. ಆದರೆ ಸುಲೇಮಾನ್ ತಾನು ಇಂತಹ ಕೆಲಸ ಮಾಡುವುದಿಲ್ಲವೆಂದು ಹೇಳಿ ಹೊರಟು ಹೋದನು. ಮುಂದೆ ಹುಲಿಯ ಹತ್ತಿರ ಹೋಗಿ, "ನೀನು ಒಬ್ಬ ಶುದ್ಧ ಸೋಮಾರಿಯನ್ನು ತಿಂದರೆ ನಿನ್ನ ಹೊಟ್ಟೆ ಸರಿಯಾಗುತ್ತದೆ" ಎಂದು ಹೇಳಿದನು ಮತ್ತು ಹಿಂದೆ ನಡೆದ ಮರದ ವಿಷಯವೆಲ್ಲ ಹೇಳಿದನು.

ಅದಕ್ಕೆ ಹುಲಿ, "ನಿನ್ನಂತಹ ಸೋಮಾರಿ ಪ್ರಪಂಚದಲ್ಲೇ ಎಲ್ಲೂ ಇರಲಾರನು" ಎಂದು ಹೇಳಿ ಅವನನ್ನೇ ತಿಂದು ಬಿಟ್ಟಿತು.

ಸಂಗ್ರಹ : ವಿನೋದ್ ಗನ್ಸಾಲ್ವಿಸ್
ಚಿಕ್ಕಮಗಳೂರು.
(ಸೌಜನ್ಯ : 'ಜನಮಿತ್ರ')

## ವೇದಿಕೆ

### ತೀರ್ಪುಗಾರರ ನಿರ್ಣಯವೂ ಅಸಂಬದ್ಧವೇ ?

ಪ್ರಿಯರೆ,

ಕಲಾ ರಂಗದ ನಾಟಕಗಳ ಬಗ್ಗೆ ಬರೆಯುತ್ತಾ ವಿಮರ್ಶಕರೊಬ್ಬರು 'ನಿರ್ಮಲಾ' ನಾಟಕ ನೋಡಿ ವ್ಯಥೆ ಪಟ್ಟಿದ್ದಕ್ಕಾಗಿ ತಿಳಿಸಿದ್ದಾರೆ. ಪುಸ್ತಕ ರೂಪದಲ್ಲಿ ಹೊರ ಬಂದು ಹಲವಾರು ಪ್ರದರ್ಶನ ಕಂಡ ಈ ನಾಟಕವು ವಿಭಾಗ ಮಟ್ಟದವರೆಗೆ 3 ಪ್ರಥಮ ಬಹುಮಾನ ಹಾಗೂ ರಾಜ್ಯ ಮಟ್ಟದಲ್ಲಿ ದ್ವಿತೀಯ ಬಹುಮಾನ ಗೆದ್ದ ಸಾಧನೆಯನ್ನು ವಿಮರ್ಶಕರು ಮರೆತಂತಿದೆ. ಆ 12 ಜನ ತೀರ್ಪುಗಾರರೂ 'ಅಸಂಬದ್ಧ ನಿರ್ಣಯ' ನೀಡಿದ್ದಾರೆಯೆ?

ನಮ್ಮ ಬಳಗದ ವತಿಯಿಂದಲೂ 2 ಪ್ರದರ್ಶನ ನೀಡಿ ಜನರ ಮೆಚ್ಚುಗೆ ಗಳಿಸಿದ, ಅಶ್ಲೀಲತೆಯ ಸೋಂಕಿಲ್ಲದ ಚಿಂತನಾರ್ಹ ನಾಟಕ ಅದು. ಹುಡುಗಿಯೊಬ್ಬಳು ಸಾರ್ವಜನಿಕ ರಂಗಕ್ಕಿಳಿದಾಗ 'ಗಾಸಿಪ್' ಟೀಕೆಯನ್ನು ಕಾಡುವ ಮನೋಜ್ಞ ಹಾಗೂ ನಮ್ಮ ಸಂದರ್ಭಕ್ಕೆ ಅಗತ್ಯವಾದ, ಈ ವಸ್ತು ಗಂಡಸರೂ ಆದ ವಿಮರ್ಶಕರನ್ನು ಕಾಡಿರಲಿಕ್ಕಿಲ್ಲ.

**ಸುವರ್ಣಕೇಶವ್ ಮತ್ತು ಛಾಯಾ,**
**ಸಹಸಂಚಾಲಕಿಯರು.**

**ಸುಮನ ಸುಧಾಕರ್ ಮತ್ತು**
**ಗೀತಾ ಎಸ್. ಭಟ್,**
ಸದಸ್ಯೆಯರು,
ರಾಷ್ಟ್ರೋತ್ಥಾನ ಬಳಗ, ಹರಿಹರಪುರ.

## ಒಳ್ಳೆಯದಲ್ಲ ಎನ್ನಿಸಿದ್ದನ್ನು ಪ್ರಶ್ನಿಸುವ ಹಕ್ಕು ಪ್ರತಿಯೊಬ್ಬನಿಗೂ ಇದೆ

ಪ್ರಿಯರೆ,

'ಶೃಂಗ' ರ ಲೇಖನಕ್ಕೆ ಎಸ್. ವಿ. ರಮೇಶ್ ಅವರ ಪ್ರತಿಕ್ರಿಯೆ ನೋಡಿ ನನ್ನ ಈ ಅಭಿಪ್ರಾಯಗಳನ್ನು ಬರೆಯುತ್ತಿದ್ದೇನೆ.

'ಕಲಾ ರಂಗ' ವೊಂದೇ ಶೃಂಗೇರಿಯ ರಂಗ ಭೂಮಿ ತಂಡವಲ್ಲ. ಹಲವಾರು ಯುವಕ–ಯುವತಿ ಮಂಡಲ ಮತ್ತಿತರ ಸಂಘಗಳವರೂ ನಾಟಕಗಳನ್ನಾಡುತ್ತಿರುತ್ತಾರೆ ಅವರುಗಳ ಕಲ್ಪನೆಯಲ್ಲಿರುವ ನಾಟಕಗಳ ಪರಿಕಲ್ಪನೆ ಸುಧಾರಣೆಯಾಗಬೇಕಾಗಿರುವುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಪರಿಕಲ್ಪನೆಯ ಸುಧಾರಣೆ ಅಥವಾ ಬದಲಾವಣೆ ಎಂದೊಡನೆ 'ನೀನಾಸಂ'ರ ಅನುಕರಣೆ ಆಗಬೇಕಿಲ್ಲ ರಂಗ ಭೂಮಿಯ ಹೊಸ ಸಾಧ್ಯತೆಗಳ ಬಗ್ಗೆ, ಮತ್ತು ತಮ್ಮಲ್ಲಿನ ಒಳಿತು–ಕೆಡಕುಗಳ ಬಗ್ಗೆ ಯೋಚಿಸುವುದು ಒಳಿತು ಎಂದು ಮಾತ್ರ 'ಶೃಂಗ' ಅವರು ಸೂಚಿಸಿದ್ದಾರೆನ್ನಿಸುತ್ತದೆ.

"ನಮಗೆ ಯಾರೂ ಹೇಳಿ ಕೊಡಬೇಕಾಗಿಲ್ಲ" ಎಂಬ ಧೋರಣೆ ಇಲ್ಲಿ ಕಂಡು ಬರುತ್ತದೆ. ಶೃಂಗೇರಿಯಂತಹ ಸ್ವಚ್ಛ ಪರಿಸರದ ಮುಗ್ಧ ಜನರ ಅಭಿರುಚಿಯನ್ನು ಗೊಂದಲಗೊಳಿಸಿ, ಒಳ್ಳೆಯದನ್ನು ಅವರು ಗುರ್ತಿಸದಂತೆ, ಆಸ್ವಾದಿಸದಂತೆ ಮಾಡುವ ಎಲ್ಲ ನಾಟಕಗಳನ್ನೂ ಪ್ರಶ್ನಿಸುವುದು ಅನಿವಾರ್ಯ ಇಲ್ಲದೆ ಹೋದಲ್ಲಿ ಶೃಂಗೇರಿಯ ಈ ಪರಿಸರ ಇನ್ನು ಕೆಲವೇ ದಿನಗಳಲ್ಲಿ ಕಳಪೆ ಮಸಾಲೆ, ಕೃತಿ ಚೌರ್ಯ, ಕೆಟ್ಟ ಗಿಮಿಕ್ಸ್‌ಗಳಿಂದ ಕೂಡಿದ ನಾಟಕಗಳ ಬೀಡಾದೀತು.

ಇನ್ನಾದರೂ ಕಲಾ ತಂಡಗಳು ('ಕಲಾ ರಂಗ'ವೊಂದೇ ಅಲ್ಲ) ಪ್ರಚಾರದ ಅಮಲಿನಿಂದ ಹೊರ ಬಂದು, ಪ್ರಚಾರಕ್ಕಾಗಿ ನಾಟಕದ ನಾಟಕಗಳನ್ನು ನೀಡುವುದನ್ನು ನಿಲ್ಲಿಸಲಿ ಎಂಬುದು ನನ್ನ ಆಶಯ. ಈ ಪರಿಸರದ ಪ್ರತಿಯೊಬ್ಬನೂ ಯಾವುದನ್ನೇ ಆಗಲಿ ಪ್ರಶ್ನಿಸುವ, ತಿರಸ್ಕರಿಸುವ ನೈತಿಕ ಹಕ್ಕನ್ನು ಹೊಂದಿದ್ದಾನೆ.

ನಮಗೆ ಇಲ್ಲಿ ಏನೂ ಮಾಡಲು ಸಾಧ್ಯವಿಲ್ಲದಿದ್ದರೆ ಹೋಗಲಿ. ಆದರೆ ಕೆಟ್ಟದ್ದನ್ನು ಮಾಡುವುದು ಹಾಗೂ ಇರುವುದನ್ನು ಕೆಡಿಸುವುದು ಮಾತ್ರ ಬೇಡ ಎಂಬ ಪ್ರಜ್ಞೆ ರಂಗ ಕರ್ಮಿಗಳಲ್ಲಿ ಮೂಡಬೇಕಾದುದು ಅವಶ್ಯ. ನಮ್ಮ ಒಂದು ಕೆಟ್ಟ ಕೃತಿ ನಾಳಿನ ರಂಗ ಕಲೆಯನ್ನೇ ಅಪಾಯದ ಅಂಚಿಗೆ ದೂಡಬಹುದೆನ್ನುವ ಪ್ರಜ್ಞೆ ರಂಗ ಕರ್ಮಿಗಳಲ್ಲಿ ಸದಾ ಜಾಗೃತವಾಗಿರಬೇಕಾಗುತ್ತದೆ ಏಕೆಂದರೆ ಕಲೆ ಸಮಾಜದ ಸ್ವತ್ತು. ಯಾವುದೇ ಒಬ್ಬ ವ್ಯಕ್ತಿಯದ್ದಲ್ಲ.

**—ಟಿ ಎಲ್. ಉಮೇಶ್, ಕೆಕ್ಕಾರು.**

## ವಿಮರ್ಶಕರು ಮೆಚ್ಚಿದರೆಷ್ಟು ಬಿಟ್ಟರೆಷ್ಟು ?

ಪ್ರಿಯರೆ,

'ಶೃಂಗ'ರವರು ಕಲಾರಂಗದ ರಮೇಶ್‌ರವರ ನಾಟಕಗಳನ್ನು ಹೀನಾಮಾನ ಬೈದಿರುವುದು ಬೇಸರ ತಂದಿತು ಕಾರಣ ಇಷ್ಟೆ :

ಏನೂ ಇರದ ಜಾಗದಲ್ಲಿ ಚೂರಾದರೂ ಇರುವುದನ್ನು ನಾವು ಮೆಚ್ಚಬೇಕು. ರಮೇಶ್‌ರವರು ಏನೂ ತರಬೇತಿ ಇಲ್ಲದೆ ಒಂದು ತಂಡ ಕಟ್ಟಿ ಕಷ್ಟಪಟ್ಟು ಒದ್ದಾಡಿ ಒಂದಷ್ಟು ಚಟುವಟಿಕೆ ನಡೆಸುತ್ತಿರುವುದು ನಮಗೆ ಹೊಟ್ಟೆ ಉರಿಯುವ ವಿಷಯವಾಗಬಾರದು. ಅವರು ನಮ್ಮ ಊರಿನವರು ಎಂಬ ಕಾರಣಕ್ಕಾಗಿ ಅವರ ಪರ ವಹಿಸುತ್ತಿಲ್ಲ. ಆದರೆ ಈ ಊರಿಗೆ ಹೊಸ ಮಾದರಿಯ ನಾಟಕಗಳನ್ನು ಪರಿಚಯಿಸಿದವರು ಅವರೇ. ಈಗಲೂ ಅವರ ತಂಡದ ಕಾರ್ಯಕ್ರಮಕ್ಕೆ ಈ ಹಳ್ಳಿಯ ಸುತ್ತಮುತ್ತಲಿಂದ 500–1000 ಜನ ಸೇರುತ್ತಾರೆ. ಹೀಗಿರುವಾಗ 'ಶೃಂಗ' ರಂಥವರು ನಾಟಕ ಮೆಚ್ಚಿದರೆಷ್ಟು ಬಿಟ್ಟರೆಷ್ಟು?

ಜನಸಾಮಾನ್ಯರ ಸಮೂಹಕ್ಕೆ ಬೆಲೆ ಕೊಡುವ ನಿಷ್ಪಕ್ಷಪಾತ ಪತ್ರಿಕೆಯಾದ 'ಮುಂಜಾವು' ಇಂತಹ ಲೇಖನ ಪ್ರಕಟಿಸುವುದರಿಂದ ಪ್ರತಿಭಾವಂತರು ಮತ್ತಷ್ಟು ಕಮರಿ ಹೋಗುತ್ತಾರೆ

ದಯವಿಟ್ಟು ಕಲಾವಿದರಿಗೆ ಸಹಕರಿಸಿ

**—ಪ್ರಸನ್ನ ಕೆ. ಎನ್.**
ಮತ್ತು ಬೇಗಾರಿನ ಅಭಿಮಾನಿಗಳು.
(19 ಜನರ ಸಹಿ ಇದೆ.)

## ಹೀನ ಶೀರ್ಷಿಕೆಗೆ ನೋಟೀಸ್

(2ನೇ ಪುಟದಿಂದ)

**ನೋಟೀಸ್**

**ಒಂದು ವೇಳೆ ಈಗಾಗಲೇ ನೇರವಾಗಿಯೋ ಅಗಲಿ ಪರೋಕ್ಷವಾಗಿಯೋ ಆಗಲಿ, (ಯಾವುದೇ) ಹೆಣ್ಣಿನ ಕಡೆಯವರಿಂದ (ಯಾವನೇ) ವರ ಮತ್ತು ವರನ ಕಡೆಯವರು ಹಣ ಮತ್ತು ಹಣದ ಮೌಲ್ಯವಿರುವ ಯಾವುದೇ ವಸ್ತುವನ್ನು ಪಡೆದಿದ್ದರೆ, ಅದನ್ನು 3 ತಿಂಗಳ ಒಳಗಾಗಿ ಈ ಕೂಡಲೇ ಹೆಣ್ಣಿಗೆ ವಾಪಾಸ್ ಕೊಡತಕ್ಕದ್ದು. ತಪ್ಪಿದಲ್ಲಿ, (ಈಗ ನಮಗೆ ತಿಳಿದಿರುವ ಪ್ರಕರಣಗಳಲ್ಲಿ) ಈಗಾಗಲೇ ನಮ್ಮ ಬಳಿ ಇರುವ ಆಧಾರಗಳ ಮೇಲೆ ಹೆಚ್ಚಿನ ವಿವರಣೆಯನ್ನು ದೂರು ಅಥವಾ ಮಾಹಿತಿ ಕೊಡಲು ಸಿದ್ಧರಿರುವ ಯಾರಿಂದಲೇ ಆಗಲಿ ಪಡೆದುಕೊಂಡು, ವರದಕ್ಷಿಣೆ ವ್ಯವಹಾರದಲ್ಲಿ ಪಾಲುದಾರರಾದ ವರ ಮತ್ತು ಇತರರೆಲ್ಲರ ಮೇಲೆ ಅನಿವಾರ್ಯವಾಗಿ ಕ್ರಿಮಿನಲ್ ಮೊಕದ್ದಮೆಯನ್ನು ಕೈಗೊಳ್ಳಬೇಕಾಗುವುದು.**

**ಸೂಚನೆ :–** ಈ ಮೂರು ತಾ॥ಗಳಲ್ಲಿ ವರದಕ್ಷಿಣೆ ವಿರೋಧಿ ಹಾಗೂ ಮಹಿಳೆಯ ಅಸಹಜ ಸಾವುಗಳ ಬಗ್ಗೆ ಕಾಳಜಿ ಇರುವ ಎಲ್ಲಾ ಮಹಿಳಾ/ಯುವತಿ/ಪ್ರಜ್ಞಾವಂತ ಸಂಘಟನೆಗಳು ಈ ದಿಸೆಯಲ್ಲಿ ತಪ್ಪಿತಸ್ಥರಿಗೆ ಶಿಕ್ಷೆ ಆಗಲು ಸಹಕರಿಸುತ್ತಾರೆಂದು ಆಶಿಸುತ್ತೇನೆ..

## ವಿಮರ್ಶೆಯ ಬಗೆಗೇಕೆ ಅಸಹನೆ ?

[ಇದೊಂದು ಗಂಭೀರ ಚರ್ಚೆ. ಇಂಥಲ್ಲಿ ಎದುರುಗಡೆಯವನ ಅಭಿಪ್ರಾಯ ನಮಗೆ ಇಷ್ಟವಾಗದಿದ್ದಾಗಲೂ ಆತನ ವಾದಕ್ಕೆ ಪ್ರತಿವಾದ ಹೂಡಿ, ನಮ್ಮ ವಿಚಾರವನ್ನು ಮಂಡಿಸಬೇಕೇ ಹೊರತು, ಅಂಥದೊಂದು ಅಭಿಪ್ರಾಯ ಅಥವಾ ಅನ್ನಿಸಿಕೆ ಹೊಂದುವ ಆತನ ಸ್ವಾತಂತ್ರ್ಯವನ್ನು ಅಲ್ಲಗಳೆಯುವುದು ಸರಿಯಲ್ಲ. ಒಂದು ವೇಳೆ ಅದೂ ...ಡ ಅನಿವಾರ್ಯವಾದರೂ, ಅದರಲ್ಲೂ ...ಯನು ಬೇಕು ಹಾಗೂ ಅದು ವಿಚಾರದ ಆಧಾರದಲ್ಲಿರಬೇಕು. 'ಮಂತ್ರಕ್ಕಿಂತ ...ಗುಳೇ ಹೆಚ್ಚು' ಎಂಬಂತಾಗಬಾರದು.

ಬಿ.ಎಸ್ಸಿ., ಬಿ.ಎಡ್. ಆದ ಶೃಂಗೇರಿಯ ...ಕ್ಷಕರೊಬ್ಬರು ಈ ವಿಚಾರದ ಚರ್ಚೆಗೆ ...ಕವಾಗುವಂಥದೇನನ್ನೂ ಅಷ್ಟಾಗಿ ...ಯದಿದ್ದರೂ, ವೈಯಕ್ತಿಕವಾಗಿ ವಿಮರ್ಶಕರ ಮೇಲೆ ಆಕ್ರೋಶ ಕಾರುವ ಪತ್ರವೊಂದನ್ನು ಬರೆದಿದ್ದಾರೆ. 'ಅಸಂಬದ್ಧ, ...ಚ್ಚು, ಭ್ರಮೆ. ಪೂರ್ವಾಗ್ರಹ ಅಲ್ಲ ...ನ್ನುವ ಪೂರ್ವಾಗ್ರಹ, ಸವಾಲು....' ...ಂತಾಗಿ ಬರೀ ಭಾವುಕತೆ, ಬಾಲಿಶತನಗಳೇ ತುಂಬಿರುವ ಆ ಪತ್ರವನ್ನು ಪ್ರಕಟಣೆಗೆ ಸರ್ವಥಾ ಅಯೋಗ್ಯವೆಂದು ಕೈಬಿಡಲಾಗಿದೆ.

ಇನ್ನು, ನಮಗಿಷ್ಟವಾಗದ ಅಭಿಪ್ರಾಯವೆಲ್ಲವೂ ಬೈಗುಳವಲ್ಲ. ಈವರೆಗಿನ ಚರ್ಚೆಯಲ್ಲಿ ಯಾರೂ ಕಲಾ ರಂಗ ಅಥವಾ ರಮೇಶ್ ಬಗ್ಗೆ ಅಸಹನೆ–ಅಸೂಯೆಗಳಿಂದ ಬರೆದಿಲ್ಲ. ಸ್ಥಳೀಯ ಕ್ರಿಯಾಶೀಲ ತಂಡವೆಂಬ ಅಭಿಮಾನದಿಂದಲೇ ಅದರ ತಪ್ಪುಗಳನ್ನು ತಿದ್ದಿಕೊಳ್ಳಲು ಸೂಚಿಸಲೆತ್ನಿಸಿದ್ದಾರೆ. ಇಂಥ ಅಭಿಮಾನ, ನಿರೀಕ್ಷೆಗಳಿಲ್ಲವಾದರೆ ನಿರ್ಲಕ್ಷ್ಯ ಮಾಡಬಹುದಿತ್ತು. ನಿರ್ಲಕ್ಷ್ಯ ಮತ್ತು ಕುರುಡು ಅಭಿಮಾನ ಇವೆರಡೂ ಇಂಥ ಉದಯೋನ್ಮುಖರ ಬೆಳವಣಿಗೆಗೆ ಏನೇನೂ ಪ್ರಯೋಜನಕಾರಿಯಲ್ಲ ಎಂಬುದನ್ನು ಮತ್ತೆ ಹೇಳಬೇಕಾಗಿಲ್ಲವಷ್ಟೆ?

ವಸ್ತುನಿಷ್ಠ ವಿಮರ್ಶೆ ಬಹು ಸಾರಿ ಕಟುವಾಗಿ ಇರುವುದು ಅನಿವಾರ್ಯವಾಗಬಹುದು. ಅಂಥ ವಿಮರ್ಶೆ ಬೇಡವೇ ಬೇಡ ಎನ್ನುವುದಾದಲ್ಲಿ, 'ಕಲಾರಂಗ'ವನ್ನೇ ಉದಾಹರಣೆಗೆ ತೆಗೆದುಕೊಂಡರೆ, ಅವರಿಗಿರುವ ಮಿತಿಯಲ್ಲೇ ಆದರೂ, ಅವರೀಗ ನೀಡುತ್ತಿರುವುದೇ ಶ್ರೇಷ್ಠ ಕೃತಿಗಳೆಂದು ಈ ಎಲ್ಲ ಟೀಕೆಗಳ ಅರ್ಥವೆ ? ಮತ್ತೇಕೆ ವಿಮರ್ಶೆಯ ಬಗ್ಗೆ ಇಷ್ಟೊಂದು ಅಸಹನೆ ?

ವಿಮರ್ಶೆಗಳನ್ನು ಅರಿತು ಅರಗಿಸಿಕೊಂಡು ಬೆಳೆಯಲಾರದ–ಅದನ್ನು ಸಹಿಸಲೂ ಬಾರದ–ಯಾವನೇ ಆಗಲಿ ಯಾವ ತಂಡವೇ ಆಗಲಿ, ಆಳ–ಅಗಲಗಳಲ್ಲಿ ಬೆಳೆಯಲಾರರು. ಕಲಾಕೃತಿಗಳ ಸಂಖ್ಯೆ ಮತ್ತು ವೈವಿಧ್ಯಕ್ಕಿಂತಲೂ ಅವುಗಳ ಗುಣಮಟ್ಟ ಹೆಚ್ಚು ಮುಖ್ಯ. ಗಿಡ ಹಣ್ಣು ಬಿಡುವ ಮೊದಲು ಸಾಕಷ್ಟು ಆಳವಾಗಿ ಬೇರು ಬಿಟ್ಟು, ವಿಶಾಲವಾಗಿ ಹರಡಿ ಬೆಳೆದಿರಬೇಕೆಂದು ಅದರ ಪೋಷಕ ಬಯಸಿದರೆ ಗಿಡಕ್ಕೇ ಶ್ರೇಯಸ್ಸು. ಇಲ್ಲವಾದರೆ ಅದರ ಗಾತ್ರವೂ ಪೀಚು, ಅದರ 'ಫಲ' ಗಳೂ ರುಚಿಯಲ್ಲಿ ಅಷ್ಟಕ್ಕಷ್ಟೇ ಆಗಿರುತ್ತವೆ. ಅಲ್ಲವೆ?

**—ಸಂಪಾದಕ** ]

(ಇಲ್ಲಿಗೆ ಈ ಚರ್ಚೆಯನ್ನು ಮುಕ್ತಾಯಗೊಳಿಸಿದೆ)

## ಟಾಕೀಸಿನಲ್ಲಿ ಧೂಮಪಾನ

ಕೊಪ್ಪದ ಜೆ. ಎಂ. ಜೆ. ಟಾಕೀಸಿನಲ್ಲಿ ಧೂಮ ಪಾನಿಗಳ ಹಾವಳಿಗೆ ಯಾವ ಅಂಕೆಯೂ ಇಲ್ಲವಾಗಿದೆ. ಆಡಳಿತ ವರ್ಗ ಮತ್ತು ಪೋಲೀಸರು ತೀಕ್ಷ್ಣ ಕ್ರಮ ಕೈಗೊಳ್ಳಲಿ.

—ನಂದ, ಕೊಪ್ಪ.

## ಜಾತ್ಯತೀತ ಮತ್ತು ಸರಳ ವಿವಾಹಗಳು

ಕೊಪ್ಪದ ದೂರವಾಣಿ ಇಲಾಖೆಯ ಇಂಜಿನಿಯರ್ ಕೆ. ಎ. ಆ್ಯಂಟನಿ ಮತ್ತು ಟೆಲಿಫೋನ್ ಸೂಪರ್‌ವೈಸರ್ ಭಾರತಿ ಇವರುಗಳು ಈಚೆಗೆ ರಿಜಿಸ್ಟರ್ಡ್ ಮದುವೆ ಆಗಿದ್ದಾರೆ.

ಶೃಂಗೇರಿ ತಾ॥ ಸೂರುಗೋಡು ರಾಮಣ್ಣ ನಾಯ್ಕರ ಮಗಳು ವಿಮಲ ಮತ್ತು ಕೆಸಗೋಡು ನಾಗರಾಜ್ ಇವರ ಸರಳ ವಿವಾಹ ಗಂಡಗಟ್ಟ ಶಾಲೆಯಲ್ಲಿ ಕಾಲೇಜು ಉಪನ್ಯಾಸಕ ಕೆ. ಪುಟ್ಟಯ್ಯನವರ ನೇತೃತ್ವದಲ್ಲಿ ನಡೆಯಿತು.

ಶೃಂಗೇರಿ ತಾ॥ ಬಾಗೋಡಿನ ಯಶೋದ ಮತ್ತು ಮಣಜಲಿನ ಎಂ. ಸಿ. ಕೃಷ್ಣ ಮೂರ್ತಿ ಇವರ ಸರಳ ವಿವಾಹ ಮೇ 11 ರಂದು ಕಲ್ಕುಳಿ ವಿಠಲಹೆಗ್ಡೆಯವರ ನೇತೃತ್ವದಲ್ಲಿ ಕಮ್ಮರಡಿಗೆ ಸಮೀಪದ ಅಂತರಗಟ್ಟೆ ದೇವಸ್ಥಾನದ ಕಲ್ಯಾಣ ಮಂಟಪದಲ್ಲಿ ನಡೆಯಿತು.

## ವಿದ್ಯಾರ್ಥಿ ನಿಲಯಗಳಿಗೆ ಅರ್ಜಿ ಆಹ್ವಾನ

ಕೊಪ್ಪ : ಈ ತಾಲ್ಲೂಕಿನಲ್ಲಿರುವ 1) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗ ವಿದ್ಯಾರ್ಥಿನಿಲಯ, ಕೊಪ್ಪ 2) ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರ ವಿದ್ಯಾರ್ಥಿ ನಿಲಯ, ಕೊಪ್ಪ 3) ಪ. ಜಾತಿ/ಪ ವರ್ಗಗಳ ಬಾಲಕಿಯರ ವಿದ್ಯಾರ್ಥಿ ನಿಲಯ, ಕೊಪ್ಪ 4) ಪ. ಜಾತಿ / ಪ. ವರ್ಗಗಳ ಬಾಲಕರ ವಿದ್ಯಾರ್ಥಿ ನಿಲಯ, ಕಮ್ಮರಡಿ 5) ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರ ವಿದ್ಯಾರ್ಥಿ ನಿಲಯ, ಬಸರೀಕಟ್ಟೆ—ಈ ವಿದ್ಯಾರ್ಥಿ ನಿಲಯಗಳಿಗೆ 5ನೇ ತರಗತಿಯಿಂದ 10ನೇ ತರಗತಿವರೆಗೆ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿ–ವಿದ್ಯಾರ್ಥಿನಿಯರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಆಸಕ್ತ ವಿದ್ಯಾರ್ಥಿ – ವಿದ್ಯಾರ್ಥಿನಿಯರು ನಿಗದಿತ ಅರ್ಜಿ ಫಾರಂಗಳನ್ನು ಕ್ಷೇತ್ರಾಭಿವೃದ್ಧಿ ಅಧಿಕಾರಿಗಳು, ಕೊಪ್ಪ ಇವರಿಂದ ಪಡೆದು, 31-5-90 ರೊಳಗೆ ಅದೇ ಅಧಿಕಾರಿಗಳಿಗೆ ಸಲ್ಲಿಸಬೇಕು.

ಭರ್ತಿ ಮಾಡಿದ ಅರ್ಜಿ ಫಾರಂ ಜೊತೆಗೆ ವರಮಾನದ ಸರ್ಟಿಫಿಕೇಟ್ ಮತ್ತು ಜಾತಿ ಪತ್ರ ಹಾಗೂ ಹಿಂದಿನ ಶಾಲಿನಲ್ಲಿ ತೇರ್ಗಡೆಯಾದ ಅಂಕ ಪಟ್ಟಿಯನ್ನು ಲಗತ್ತಿಸಬೇಕು.

**ಅಡಿಕೆ ಧಾರಣೆ**

ಶಿವಮೊಗ್ಗ : 11-5-1990
ಸರಕು : 4089-4509
ಬೆಟ್ಟೆ : 2989-3322
ಗೊರಬಲು : 2021-2121
ಸಾಗರ : 11.5 1990
ಇಡಿ : 3209-3509
ಆಪಿ : 4290-4487

## ಮಂಡಲ ಪಂಚಾಯಿತ್ತಿ ಸದಸ್ಯರೋ ಸರ್ಕಾರಿ ಅಧಿಕಾರಿಗಳೋ?

### ಓದುಗರ ಪತ್ರ

ಪ್ರಿಯ ಸಂಪಾದಕರೆ,

ಹಳ್ಳಿಗಳ, ಗ್ರಾಮಗಳ ಮಟ್ಟದಿಂದಲೂ ಸಹ ಆಡಳಿತ, ಅಧಿಕಾರ ಜನತೆಯ ಪ್ರತಿನಿಧಿಗಳ ಮೂಲಕ ನಡೆಯಬೇಕು, ಅಧಿಕಾರ ಜನತೆಯದೇ ಆಗಬೇಕು ಎಂಬ ದೃಷ್ಟಿಯಿಂದ ಸರ್ಕಾರ ಮಂಡಲ ಪಂಚಾಯ್ತಿಗಳನ್ನು ರೂಪಿಸಿದೆಯಷ್ಟೆ. ಆದರೆ, ನಮ್ಮ ಪಂಚಾಯ್ತಿಗಳ ಈಗಿರುವ ಸದಸ್ಯರುಗಳನ್ನೆಲ್ಲ ನೋಡುವಾಗ ಇವರು ಜನತೆಯ ಪ್ರತಿನಿಧಿಗಳೋ ಅಥವಾ ಸರ್ಕಾರಿ ಅಧಿಕಾರಿಗಳೋ ಎಂಬ ಅನುಮಾನ ಮೂಡುವಂತಾಗಿದೆ.

ಹಾಗಿಲ್ಲವಾದರೆ, ಈ ಜನಪ್ರತಿನಿಧಿಗಳೆಂಬವರು ಜನತೆಯ ದಿನ ನಿತ್ಯದ ಯಾವ ಬವಣೆ, ಸಮಸ್ಯೆಗಳ ಬಗ್ಗೆ ದೃಢವಾಗಿ ಧ್ವನಿ ಎತ್ತಿದ್ದಾರೆ, ಕ್ರಿಯಾಶೀಲವಾಗಿ ಶ್ರಮಿಸುತ್ತಿದ್ದಾರೆ ?

1. ರೈತರಿಗೆ ಸಾಲ ಮನ್ನಾ ಹೋಗಲಿ, ಬಡ್ಡಿ ರಿಯಾಯ್ತಿ, ಕಂತು ವಿಸ್ತರಣೆ ಇತ್ಯಾದಿಗಳ ಬಗೆಗಾಗಲಿ, ಅಡಿಕೆ ಬೆಳೆಗಾರರ ಸಂಕಷ್ಟಗಳ ಬಗೆಗಾಗಲಿ, ವಿದ್ಯುತ್ ಅವ್ಯವಸ್ಥೆಯ ಬಗೆಗಾಗಲಿ, ಇವರ ಪ್ರಯತ್ನ ಏನು ?

2. ಈಚೆಗೆ ಮಂಡಲಗಳಲ್ಲಿ ಮನೆ ಗಂದಾಯವನ್ನು ತೀವ್ರವಾಗಿ ಏರಿಸಿದ್ದಾರೆ. ಕೇವಲ ಸರ್ಕಾರಿ ನೌಕರರಂತೆ ಟೈಮ್ ಪ್ರಕಾರ ಕೆಲಸ ಮಾಡಿ ಭತ್ಯೆ ಪಡೆಯುವುದಷ್ಟೇ ಇವರ ಕೆಲಸವೆ?

ಈ ವ್ಯವಸ್ಥೆ ರೈತರ ಪಾಲಿಗಂತೂ ತೀರಾ ನಿರಾಶೆ, ಭ್ರಮ ನಿರಸನ ಮೂಡಿಸಿದೆ.

ಕೃಷ್ಣಮೂರ್ತಿ ಗೌಡ,
ಕಾಂಡ್ಯ, ಕೊಪ್ಪ ತಾ।

## ಕೊಪ್ಪ : ಒಂದೇ ದಿನ 2 ದುರ್ಮರಣ

ಕೊಪ್ಪ : ಇಲ್ಲಿನ ರೋಶನ್ ಹೋಟೆಲ್ ಪಾಲುದಾರ ನಾಗಲಾಪುರದ ಮಂಜುನಾಥ ಶೆಟ್ಟಿ ಮೇ 9 ರಂದು ಬೆಳಿಗ್ಗೆ ಲಾರಿಯೊಂದರ ಹಿಂಭಾಗಕ್ಕೆ ಡಿಕ್ಕಿ ಹೊಡೆದು, ಆಸ್ಪತ್ರೆಗೆ ಸಾಗಿಸುತ್ತಿದ್ದಂತೆ ಮೃತಪಟ್ಟರು. ಎಳೆಯ ಪ್ರಾಯದ ಇವರಿಗೆ ಒಂದು ಹೆಣ್ಣು, ಒಂದು ಗಂಡು–2 ಮಕ್ಕಳಿದ್ದಾರೆ.

ನಾಗಲಾಪುರದಿಂದ ಎಂದಿನಂತೆ ತಮ್ಮ ಸ್ಕೂಟರಿನಲ್ಲಿ ಬರುತ್ತಿದ್ದ ಮಂಜುನಾಥ್ ಸ್ವಲ್ಪ ವೇಗದಲ್ಲೇ ಸ್ಕೂಟರ್ ಓಡಿಸುತ್ತಿದ್ದು, ಮೇಲಿನಪೇಟೆ ಮುಖ್ಯ ರಸ್ತೆಯಿಂದ ವಿದ್ಯಾನಗರದ ರಸ್ತೆಗೆ ತಿರುಗಿದ ಎಂಇಸಿ 3344 ನಂಬರಿನ ಲಾರಿಯನ್ನು ಬಹುಶಃ ಗಮನಿಸದೇ ಅದರ ಹಿಂಭಾಗದ ಆ್ಯಂಗ್ಲರ್‌ಗೆ ಡಿಕ್ಕಿ ಹೊಡೆದರು. ಅವರ ಎದೆಗೆ ತೀವ್ರ ಪೆಟ್ಟು ಬಿದ್ದು, ಮೂಗು–ಬಾಯಿಗಳಿಂದ ರಕ್ತ ಒಸರಿತು. ಕೂಡಲೇ ಅವರನ್ನು ಆಸ್ಪತ್ರೆಗೆ ಸಾಗಿಸಿದರೂ ಪ್ರಯೋಜನವಾಗಲಿಲ್ಲ. ... ವೇ ಕ್ಷಣದಲ್ಲಿ ಅವರು ಕೊನೆಯುಸಿರೆಳೆ...

ಮೇಲ್ಪಾಲಿನ ಈ ಲಾರಿಯ ಚಾ... ಮಹಮದಾಲಿಯನ್ನು ಬಂಧಿಸಿ, ಜಾ... ನಿನ ಮೇಲೆ ಬಿಡಲಾಗಿದೆ. ಠಾಣಾಧಿ... ಎಚ್. ಟಿ. ದುಗ್ಗಪ್ಪ ತನಿಖೆ ನ... ತ್ತಿದ್ದಾರೆ.

**ಉರುಲು ಹಾಕಿಕೊಂಡು ಆತ್ಮಹ...**

ಕಿರಿಯ ಕಾಲೇಜಿನ ಜವಾನ ಭು... ಅದೇ ದಿನ ಮಧ್ಯಾಹ್ನ ತನ್ನ ಮನೆ... ಕುತ್ತಿಗೆಗೆ ಉರುಲು ಹಾಕಿಕೊಂಡು ... ಹತ್ಯೆ ಮಾಡಿಕೊಂಡಿದ್ದಾರೆ. ಸಂ... ದಲ್ಲಿನ ಚೂರು ಪಾರು ಆಸ್ತಿ ಪಾಸ್ತಿ... ಸುದೀರ್ಘ ವಿವಾದದಿಂದ ಜಿಗುಪ್ಸೆಗೊ... ದ್ದೇ ಆತ್ಮಹತ್ಯೆಗೆ ಕಾರಣವೆನ್ನಲಾ... ಇವರಿಗೆ ಮೂವರು ಮಕ್ಕಳಿದ್ದಾರೆ... ತಿಳಿದು ಬಂದಿದೆ.

ಆ ದಿನವೆಲ್ಲ ಕೊಪ್ಪದಲ್ಲಿ ಎಲ್ಲೆಡೆ ... ದಿಗ್‌ಭ್ರಮೆಯ ವಾತಾವರಣವಿತ್ತು.

## ನೀರು, ನೈರ್ಮಲ್ಯ, ಸಹಬಾಳ್ವೆ ನೂತನ ಸದಸ್ಯರ ಧ್ಯೇಯ

ಶೃಂಗೇರಿ: ಕುಡಿವ ನೀರು, ಪಟ್ಟಣದ ನೈರ್ಮಲ್ಯ ಮತ್ತು ಎಲ್ಲರೊಂದಿಗೆ ಸಹಬಾಳ್ವೆ—ಇವುಗಳಿಗಾಗಿ ತಮ್ಮ ಅಧಿಕಾರಾವಧಿಯಲ್ಲಿ ಪ್ರಾಮಾಣಿಕ ಯತ್ನ ನಡೆಸುವುದಾಗಿ ಇಲ್ಲಿನ ನೂತನ ಮಂಡಲ ಸದಸ್ಯರು ತಿಳಿಸಿದ್ದಾರೆ. ಇಲ್ಲಿನ ಜೇಸೀಸ್ ಆಶ್ರಯದಲ್ಲಿ ನಡೆದ ಅವರ ಮೊದಲ ಜನಸಂಪರ್ಕ ಸಭೆಯಲ್ಲಿ ಪತ್ರಕರ್ತ ಎನ್. ಸಿ. ಪಾಂಡುರಂಗ ಅವರುಗಳ ಸಂದರ್ಶನ ನಡೆಸಿದಾಗ ಈ ಅಭಿಪ್ರಾಯ ಪ್ರಕಟವಾಯಿತು. ರಾಜ್ಯ ಜೇಸಿ ಉಪಾಧ್ಯಕ್ಷ ಜಿ.ಎಂ. ಭಟ್ ಮುಖ್ಯ ಅತಿಥಿಯಾಗಿದ್ದರು.

## ಮೋಟಾರ್ ಸೈಕಲ್ ಡಿಕ್ಕಿ ಪಾದಚಾರಿಗೆ ಪೆಟ್ಟು

(ನಮ್ಮ ಪ್ರತಿನಿಧಿಯಿಂದ)

ಶೃಂಗೇರಿ: ಮೇ 11ರಂದು ಇಲ್ಲಿಗೆ ಸ... ಪದ ಕೃಷಿ ಕಾರ್ಮಿಕ ನಾಗಪ್ಪ ಹೆಗ್ಡೆ... ಬವರಿಗೆ ನಾಗರಹಾವು ಕಚ್ಚಿದ್ದು, ಅವ... ಧನ್ವಂತರಿ ಆಸ್ಪತ್ರೆಗೆ ಸೇರಿಸಿ, ಪೇಟೆ... ಇಂಜೆಕ್ಷನ್ ತೆಗೆದುಕೊಂಡು ಹೋಗ... ನಾಗೇಂದ್ರ ಬಳೆಗಾರ್ ಎಂಬವರಿಗೆ ... ಉಳುವೆಯ ರೆಡಿಮೇಡ್ ಬಟ್ಟೆ ಅಂಗ... ಉಮೇಶ್ ಅವರ ಮೋಟಾರ್ ಸೈ... ಡಿಕ್ಕಿಯಾಗಿ, ಬಳೆಗಾರ್‌ಗೆ ಮೂಳೆ ... ದಿದೆ. ಅಪಘಾತದ ನಂತರ ಉಮೇಶ್... ದೆ ಹೋಟೆಲು ಹೋಗಿದ್ದು, ಶೃಂಗೇರಿ ... ಯಲ್ಲಿ ದೂರು ದಾಖಲಾಗಿದೆ

## 'ಮಲೆನಾಡು ಮಲ್ಲಿಗೆ' ಮೊದಲ ವಾರ್ಷಿಕೋತ್ಸವ

ನ ರಾ. ಪುರ : ಮೂಡಬಾಗಿಲಿನ ಎಂ. ಐ. ಶ್ರೀನಿವಾಸ ಮೂರ್ತಿ ಯವರ ಸಂಪಾದಕತ್ವದ 'ಮಲೆನಾಡು ಮಲ್ಲಿಗೆ' ವಾರ ಪತ್ರಿಕೆಗೆ 1 ವರ್ಷ ತುಂಬಿದ ಸಂತೋಷ ವಿನಿಮಯದ ಕಾರ್ಯಕ್ರಮ ಇತ್ತೀ ಮೇ 6 ರಂದು ಹಿರಿಯ ರಾಜಕಾರಣಿ ಎನ್. ಪಿ. ಗೋವಿಂದೇ ಗೌಡರ ಅಧ್ಯಕ್ಷತೆಯಲ್ಲಿ ನಡೆಯಿತು. ರೆ। ಫಾ। ಮಥಾಯಸ್ ಮತ್ತು ಎಚ್. ಎಸ್. ಶಿವಸ್ವಾಮಿ ಮುಖ್ಯ ಅತಿಥಿಗಳಾಗಿದ್ದರು

ಶ್ರೀನಿವಾಸ ಮೂರ್ತಿ ತಮ್ಮ ವಿದ್ಯಾಗುರುಗಳಾದ ವಯೋವೃದ್ಧ ಎನ್. ಶಂಕರ ರಾವ್ ಅವರಿಗೆ ಕಿರು ಕಾಣಿಕೆ ನೀಡಿ ... ಸಿದರು ಹಾಗೂ ಕೊನೆಯಲ್ಲಿ ಪತ್ರಿ... ಏಜೆಂಟರು ಮತ್ತು ಬಳಗದವರಿಗೂ

## ವಿಶ್ವಮಾನವ ಭವನಕ್ಕೆ ಧ್ವನಿವರ್ಧಕ

ಹಿರೇಕೊಡಿಗೆ : ಕುವೆಂಪು ಅವರ ಜನ್ಮಸ್ಥಳವಾದ ಕೊಪ್ಪ ತಾಲ್ಲೂಕಿನ ಹಿರೇಕೊಡಿಗೆಯಲ್ಲಿ ಸಾಹಿತ್ಯಕ, ಆಧ್ಯಾತ್ಮಿಕ ಮತ್ತು ಸಾಂಸ್ಕೃತಿಕ ಕೇಂದ್ರವಾಗಿ ವಿಶ್ವಮಾನವ ಸಂದೇಶ ಭವನವನ್ನು ಬೆಳೆಸಲು ಅಂತರಾಷ್ಟ್ರೀಯ ಸಾಂಸ್ಕೃತಿಕ ಆಧ್ಯಾತ್ಮಿಕ ಸಂಸ್ಥೆಗಳಿಂದ ಸಹಾಯ ಪಡೆಯಬಹುದಾಗಿದೆ ಎಂದು ಚಿಕ್ಕಮಗಳೂರು ಮುಖ್ಯ ಕಾರ್ಯದರ್ಶಿ ಆ. ರಾ ಚಂದ್ರಹಾಸ ಗುಪ್ತ ಇಲ್ಲಿ ಅಭಿಪ್ರಾಯ ಪಟ್ಟರು. ಅವರು ಮೇ 10 ರಂದು ಇಲ್ಲಿ ನಿರ್ಮಿತವಾಗುತ್ತಿರುವ ಕುವೆಂಪು ವಿಶ್ವ ಮಾನವ ಸಂದೇಶ ಭವನಕ್ಕೆ ಯುವಜನ ಸೇವಾ ಇಲಾಖೆ ವತಿಯಿಂದ 12,000 ರೂ. ಗಳ ಧ್ವನಿವರ್ಧಕ ಯಂತ್ರಗಳನ್ನು ವಿತರಿಸಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಜಿ. ಪ. ಅಧ್ಯಕ್ಷ ಬಿ ಎಲ್. ರಾಮದಾಸ್ ಇದೇ ಸಂದರ್ಭದಲ್ಲಿ ಹಿರೇಕೊಡಿಗೆ ಗ್ರಾಮಕ್ಕೆ ಒಂದು ಲಕ್ಷ ರೂ. ವೆಚ್ಚದಿಂದ ನಿರ್ಮಿಸಲಾದ ಸರ್ವಋತು ಕೂಡು ರಸ್ತೆಯನ್ನು ಉದ್ಘಾಟಿಸಿದರು.

ಸಮಾರಂಭದಲ್ಲಿ ಜಿ ಪ. ಸದಸ್ಯರಾದ ಬಿ.ಜಿ. ಚಿದಂಬರ್, ಮತ್ತು ಸುಮಿತ್ರ... ಹಾಜರಿದ್ದರು. ವಿಶ್ವನಾಥ ಶೆಟ್ಟಿ ಸ್ವಾ... ದರು. ಮಂಡಲ ಪ್ರಧಾನ ಜಿ. ಡಿ. ... ಶ್ವರ ಗುಪ್ತರನ್ನು ಸನ್ಮಾನಿಸಿದರು. ರಾಮಮೂರ್ತಿ ವಂದಿಸಿದರು.

(ವರದಿ : ಜಿಲ್ಲಾ ವಾರ್ತಾ ಇಲಾ...



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್, ಅಚ್ಚು : ದೀಪಪಟಿಗೆ ಅಚ್ಚುಕೂಟ, ಕೊಪ್ಪ